

# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 308 (2292)
ಸದಸ್ಯರ ಹೆಸರು : ಶ್ರೀ ಎಸ್.ವ್ಹಿ.ಸಂಕನೂರ (ಪದವೀಧರ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 26-03-2021.
ಉತ್ತರಿಸುವ ಸಚಿವರು : ಮಾನ್ಯ ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು.

| ಕ್ರ.ಸಂ. | ಪ್ರಶ್ನೆಗಳು | ಉತ್ತರಗಳು |
|---|---|---|
| ಅ. | ಅಲ್ಪಸಂಖ್ಯಾತರ ಇಲಾಖೆಯ ಅಡಿಯಲ್ಲಿ ಮೊರಾರ್ಜಿ ವಸತಿ ಶಾಲೆಗೆ ಉಪನ್ಯಾಸಕರ/ಪ್ರಾಂಶುಪಾಲರ ಹಾಗೂ ಜಿಲ್ಲಾ ಅಲ್ಪಸಂಖ್ಯಾತ ಅಧಿಕಾರಿ ಮುಂತಾದ ಹುದ್ದೆಗಳಿಗೆ 2018 ರಲ್ಲಿ KPSC ಮೂಲಕ ನೇಮಕಾತಿ ಮಾಡಿಕೊಳ್ಳಲು ಪತ್ರಿಕಾ ಪ್ರಕಟಣೆ ನೀಡಲಾಗಿರುವುದು ನಿಜವೇ; | -ಹೌದು- |
| ಆ. | ಹಾಗಿದ್ದಲ್ಲಿ, ನೇಮಕಾತಿಯ ಪ್ರಕ್ರಿಯೆ ಯಾವ ಹಂತದಲ್ಲಿ ಇದೆ? (ಸಂಪೂರ್ಣ ವಿವರ ನೀಡುವುದು.) | • ಕರ್ನಾಟಕ ಲೋಕಸೇವಾ ಆಯೋಗದ ಅಧಿಸೂಚನೆ ಸಂಖ್ಯೆ:ಪಿಎಸ್‌ಸಿ/01/ಆರ್‌ಟಿಬಿ-2/2017, ದಿನಾಂಕ:23-03-2018 ರಲ್ಲಿರುವ ಹುದ್ದೆಗಳ ಅಂತಿಮ ಆಯ್ಕೆಪಟ್ಟಿಯನ್ನು ಪ್ರಕಟಿಸಿದ್ದು ಈ ಅಭ್ಯರ್ಥಿಗಳಿಗೆ ಮೂಲ ದಾಖಲೆಗಳ ಪರಿಶೀಲನೆಯನ್ನು ನಡೆಸಲಾಗಿರುತ್ತದೆ.<br>• ಆಯ್ಕೆಯಾದ ಅಭ್ಯರ್ಥಿಗಳ ಜಾತಿ/ಮೀಸಲಾತಿ ವಿದ್ಯಾರ್ಹತೆಯ ಸಿಂಧುತ್ವ ಮತ್ತು ನೈಜತೆಯ ಪ್ರಮಾಣ ಪತ್ರಗಳು ಸ್ವೀಕೃತವಾಗಿದ್ದು, ನೇಮಕಾತಿ ಆದೇಶವನ್ನು ನೀಡುವುದಷ್ಟೆ ಬಾಕಿ ಇರುತ್ತದೆ.<br>• ಈ ಸಂಬಂಧ ನೇಮಕಾತಿ ಆದೇಶ ನೀಡಲು ಅನುಮತಿಯನ್ನು ಕೋರಿ ಆರ್ಥಿಕ ಇಲಾಖೆಗೆ ಪ್ರಸ್ತಾವನೆ ಸಲ್ಲಿಸಲಾಗಿದೆ. ಆರ್ಥಿಕ ಇಲಾಖೆಯಿಂದ ಅನುಮತಿ ಪಡೆದ ತಕ್ಷಣ ನೇಮಕಾತಿ ಆದೇಶಗಳನ್ನು ಹೊರಡಿಸಲು ಕ್ರಮ ಜರುಗಿಸಲಾಗುವುದು. |

ಸಂಖ್ಯೆ: **MWD 160 LMQ 2021**

**(ಶ್ರೀಮಂತ ಬಾಳಾಸಾಹೇಬ ಪಾಟೀಲ್)**
ಕೈಮಗ್ಗ, ಜವಳಿ ಹಾಗೂ ಅಲ್ಪಸಂಖ್ಯಾತರ
ಕಲ್ಯಾಣ ಸಚಿವರು